ಕೆ. ಜಿ. ನಾಗರಾಜನ್

# ಕರ್ನಾಟಕ ರಾಜ್ಯದ ಪುರಾತತ್ತ್ವ ಇಲಾಖೆ : ಒಂದು ನೂರು ವರುಷ

ಕರ್ನಾಟಕದ ಪುರಾತತ್ತ್ವ ಮತ್ತು ಸಂಗ್ರಹಾಲಯಗಳ ಇಲಾಖೆ, ತನ್ನ ವೈಭವೋಪೇತ ಚರಿತ್ರೆಯಲ್ಲಿ ಮಹತ್ವದ ಘಟ್ಟವೊಂದನ್ನು ಹಾದು ಹೋಗುತ್ತಿದೆ. ಈಗ ಇದು ತನ್ನ ಶತಮಾನೋತ್ಸವವನ್ನು ಮುಗಿಸಿದೆ. ಇದು ೧೮೮೫ರಲ್ಲಿ ಕಾರ್ಯ ಪ್ರವೃತ್ತವಾಗಿ, ಭಾರತೀಯ ಪ್ರಾಚೀನ ವಸ್ತುಗಳ ಸಂಶೋಧನೆಯಲ್ಲಿ ಅತ್ಯುತ್ತಮವಾದ ಸೇವೆಯನ್ನು ಸಲ್ಲಿಸಿದ ಅಸೂಯೆ ಹುಟ್ಟಿಸುವಂತಹ ದಾಖಲೆಯನ್ನು ಹೊಂದಿದೆ. ಬಿ. ಎಲ್. ರೈಸ್, ಆರ್. ನರಸಿಂಹಾಚಾರ್, ಆರ್. ಶ್ಯಾಮಾಶಾಸ್ತ್ರಿ, ಡಾ॥ ಎಂ. ಎಚ್. ಕೃಷ್ಣ ಮೊದಲಾದ ವಿದ್ವಾಂಸರ ಮಾರ್ಗದರ್ಶನ ಈ ಇಲಾಖೆಯ ಕಾರ್ಯ ಚಟುವಟಿಕೆಗಳಿಗೆ ದೊರಕಿದುದು ರಾಜ್ಯದ ಒಂದು ಅದೃಷ್ಟ. ಭಾರತ ಮತ್ತು ಹೊರದೇಶಗಳೆರಡರಲ್ಲೂ ಈ ಮಹನೀಯರ ಹೆಸರುಗಳು, ಪುರಾತತ್ತ್ವ ಸಂಶೋಧನೆಯ ಅತ್ಯುತ್ತಮ ಮಟ್ಟಕ್ಕೆ ಪರ್ಯಾಯ ಪದಗಳಾಗಿವೆ.

ಇಂದಿನ ಕರ್ನಾಟಕ ರಾಜ್ಯದ ಕೇಂದ್ರ ಭಾಗವಾಗಿರುವ ಹಿಂದಿನ ಮೈಸೂರು ಸಂಸ್ಥಾನವು ನಮ್ಮ ದೇಶದ ಪ್ರಾಚೀನ ವಸ್ತುಗಳ ಸಂಶೋಧನಾ ಕ್ಷೇತ್ರದಲ್ಲಿ ಮುಂಚೂಣಿಯಲ್ಲಿತ್ತು. ಭಾರತ ಸರ್ಕಾರವು ತನ್ನ ಪುರಾತತ್ತ್ವ ಪರಿವೀಕ್ಷಣಾ ವಿಭಾಗವನ್ನು ೧೮೬೧ರಲ್ಲಿ ಸ್ಥಾಪಿಸಿತು. ರಾಜ್ಯದ ಪುರಾತತ್ತ್ವ ಪರಿವೀಕ್ಷಣೆಯ ವ್ಯವಸ್ಥಿತ ಕೆಲಸ ಮಾಡುವ ಇಲಾಖೆ ಪ್ರಾರಂಭವಾದದ್ದು ೧೮೮೫ರ ಸಮಯದಲ್ಲಾದರೂ ಕೆಲಸದಲ್ಲಿ ಹಿಂದುಳಿಯಲಿಲ್ಲ ಎನ್ನುವುದು ಕನ್ನಡಿಗರಿಗೆ ಹೆಮ್ಮೆಯ ವಿಷಯ. ಈ ದಿಸೆಯಲ್ಲಿ ಕೆಲಸ ಮಾಡುವ ಪ್ರಯತ್ನಗಳು ಮೊದಲಿನಿಂದಲೂ ಇಲ್ಲಿ ನಡೆದಿದ್ದವು. ಸ್ವತಂತ್ರ ಇಲಾಖೆಯ ರಚನೆಗೆ ಮುನ್ನ, ರಾಜ್ಯದ ಪುರಾತತ್ತ್ವ ಸಂಶೋಧನೆಯು, ಕರ್ನಲ್ ಕಾಲಿನ್ ಮೆಕೆಂಜಿ, ಮೇಜರ್ ಡಿಕ್ಸನ್ ಮತ್ತು ಬೆಂಜಮಿನ್ ಲೂಯಿಸ್ ರೈಸ್ ಮುಂತಾದವರ ವೈಯಕ್ತಿಕ ಸಾಹಸಗಳಾಗಿದ್ದವು.

ಮೈಸೂರು ಸಂಸ್ಥಾನವನ್ನು ೧೬೭೨ ರಿಂದ ೧೭೦೪ರವರೆಗೆ ಆಳಿದ ಚಿಕ್ಕದೇವರಾಜ ಒಡೆಯರು, ರಾಜ್ಯದಲ್ಲಿದ್ದ ಎಲ್ಲ ದಾನ, ದತ್ತಿಗಳನ್ನು ಪರೀಕ್ಷಿಸಬೇಕೆಂದೂ ಆಯಾ ದಾನದ ಉದ್ದೇಶ ನೇರವೇರಿದೆಯೇ ಇಲ್ಲವೇ ಎಂಬುದನ್ನು ಖಾತ್ರಿ ಮಾಡಿಕೊಳ್ಳಬೇಕೆಂದೂ ಬಯಸಿದರೆಂದು ತಿಳಿದುಬಂದಿದೆ. ಈ ಉದ್ದೇಶದಿಂದ, ರಾಜ್ಯದ ಎಲ್ಲ ಕಡೆ ಇರುವ ಶಾಸನಗಳ ಪಟ್ಟಿಯನ್ನು ಮಾಡಿಸಿ, ಪ್ರತಿಗಳನ್ನು ಸಿದ್ಧಪಡಿಸಿ, ಸಂಗ್ರಹಿಸಿದ ದಾಖಲೆ ಪುಸ್ತಕವನ್ನು ಅರಮನೆಯ ಗ್ರಂಥ ಭಂಡಾರದಲ್ಲಿ ಇರಿಸಿದ್ದರು. ದುರದೃಷ್ಟವಶಾತ್ ಆ ದಾಖಲೆಗಳು ನಾಶವಾದವು.

೧೭೯೯ ರ ಕಾಲದಲ್ಲಿ ರಾಜ್ಯದ ಪರಿವೀಕ್ಷಣಾ ಮೇಲ್ವಿಚಾರಕರಾಗಿದ್ದ ಕರ್ನಲ್ ಕಾಲಿನ್ ಮೆಕೆಂಜಿ ಅವರು, ರಾಜ್ಯದ ಎಲ್ಲ ಕಡೆಯಲ್ಲಿ ಚದರಿ ಹೋಗಿದ್ದ ಸಾವಿರಾರು ಶಾಸನಗಳನ್ನು ಪ್ರತಿ ಮಾಡಿಸಿದರು. ೧೮೬೫ರ ಸುಮಾರಿನಲ್ಲಿ ಮೈಸೂರು ಮತ್ತು ಕೊಡಗಿನ ಮುಖ್ಯ ಕಮಿಷನರ್ ಆಗಿದ್ದ ಎಲ್. ಬೌರಿಂಗ್ ಅವರು, ರಾಜ್ಯದ ಬೇರೆ ಬೇರೆ ಶಾಸನಗಳ ಛಾಯಾಚಿತ್ರಗಳನ್ನು ತೆಗೆಯಲು

ಮೇಜರ್ ಡಿಕ್ಸನ್ ಅವರನ್ನು ನಿಯುಕ್ತಗೊಳಿಸಿದರು. ಪುರಾತತ್ತ್ವ ಸಂಶೋಧನೆಯ ಕೆಲಸ ರಾಜ್ಯದಲ್ಲಿ ವ್ಯವಸ್ಥಿತವಾಗಿ ಪ್ರಾರಂಭವಾಗುವುದಕ್ಕೆ ಇದು ನಾಂದಿಯಾಯಿತು. ಆ ಕಾಲದಲ್ಲಿ ಮೈಸೂರು ಮತ್ತು ಕೊಡಗು ರಾಜ್ಯಗಳ ಸಾರ್ವಜನಿಕ ಶಿಕ್ಷಣದಕ ನಿರ್ದೇಶರಾಗಿದ್ದ ಬೆಂಜಮಿನ್ ಲೂಯಿಸ್ ರೈಸ್ ಅವರಿಗೆ ಈ ಛಾಯಾಚಿತ್ರಗಳನ್ನು ಕೊಡಲಾಯಿತು. ಕನ್ನಡಿಗರ ಭಾಷೆ ಮತ್ತು ಜೀವನಗಳ ಅಭ್ಯಾಸದಲ್ಲಿ ವಿಶೇಷ ಆಸಕ್ತಿ ಇದ್ದ ರೈಸ್ ಅವರು, ಈ ಚಿತ್ರಗಳನ್ನು ತೀವ್ರವಾಗಿ ಅಭ್ಯಾಸ ಮಾಡಿದರು.

ವ್ಯಾಪಕವಾಗಿ ಪ್ರವಾಸ ಕೈಗೊಳ್ಳುತ್ತಿದ್ದ ರೈಸ್, ಸಾರ್ವಜನಿಕ ಶಿಕ್ಷಣದ ನಿರ್ದೇಶಕನ ಕೆಲಸದಲ್ಲಿ ರಾಜ್ಯದ ಒಳ ಭಾಗಗಳಲ್ಲಿ ಪ್ರಯಾಣ ಮಾಡಿದಾಗಲೆಲ್ಲಾ, ಆಯಾ


ಡಾ|| ಆರ್. ನರಸಿಂಹಾಚಾರ್


ಬಿ. ಎಲ್. ರೈಸ್


ಡಾ|| ಎಂ. ಹ. ಕೃಷ್ಣ

ಪ್ರದೇಶದ ಸ್ವಾರಸ್ಯಕರ ವಿಷಯಗಳನ್ನು ವಿವರವಾಗಿ ಅಭ್ಯಾಸ ಮಾಡುತ್ತಿದ್ದರು.

ಡಿಕ್ಸನ್ ತೆಗೆದ ಛಾಯಾ ಚಿತ್ರಗಳು ತಮ್ಮ ವಶಕ್ಕೆ ಬಂದಾಗ, ರೈಸ್ ಅವರು ಆ ಚಿತ್ರಗಳಲ್ಲಿದ್ದ ಶಾಸನಗಳನ್ನು ಓದಿ ಅನುವಾದ ಮಾಡಿ, ಅದರ ಜೊತೆಗೆ ತಾವು ಸಂಗ್ರಹ ಮಾಡಿದ್ದ ಮತ್ತಷ್ಟು ಶಾಸನಗಳನ್ನು ಸೇರಿಸಿ, 'ಮೈಸೂರು ಶಾಸನಗಳು' ಎಂಬ ಸಂಪುಟವನ್ನು ೧೮೭೯ ರಲ್ಲಿ ಪ್ರಕಟಿಸಿದರು.

ಪುರಾತತ್ತ್ವ ಇಲಾಖೆಯನ್ನು ಮೈಸೂರು ರಾಜ್ಯದಲ್ಲಿ ವಿಧಿವತ್ತಾಗಿ ೧೮೯೦ನೇ ಇಸವಿಯಲ್ಲಿ ಸ್ಥಾಪನೆ ಮಾಡಲಾಯಿತೆಂಬುದರ ಬಗ್ಗೆ, ರಾಜ್ಯದ ದಿವಾನರಾಗಿದ್ದ ಕೆ. ಶೇಷಾದ್ರಿ ಅಯ್ಯರ್ ಅವರ ಭಾಷಣವೊಂದರಲ್ಲಿ ಸೂಚನೆಯಿದೆ. ೯ನೇ ಅಕ್ಟೋಬರ್ ೧೮೯೬ ರಂದು ದಸರೆಯ ಪ್ರಜಾಪ್ರತಿನಿಧಿ ಸಭೆಯನ್ನು ಕುರಿತು ದಿವಾನರು ಮಾತನಾಡುತ್ತಾ "ಕಳೆದ ವರ್ಷ ಪ್ರಾರಂಭದಲ್ಲಿ, ವ್ಯವಸ್ಥಿತವಾದ ಪುರಾತತ್ತ್ವ ಸಂಶೋಧನೆಯ ಕೆಲಸ ಮೈಸೂರು ರಾಜ್ಯದಲ್ಲಿ ಆರಂಭವಾಯಿತು. ಅಸಂಖ್ಯಾತವಾಗಿರುವ ಪ್ರಾಚೀನ ಶಾಸನಗಳನ್ನು ಸಂಪೂರ್ಣವಾಗಿ ಪರೀಕ್ಷಿಸಿ, ಈಗಾಗಲೇ ಕಂಡುಹಿಡಿಯಲಾದ ಶಾಸನಗಳೊಂದಿಗೆ ಪರಿಶೀಲಿಸಿ, ಮುಖ್ಯ ತೀರ್ಮಾನಗಳಿಗೆ ಬರುವ ಅವಕಾಶವನ್ನು ಮಾಡಿಕೊಡಲಾಯಿತು. ಪಕ್ಕದ ಮುಂಬಯಿ ಮತ್ತು ಮದ್ರಾಸ್ ಸಂಸ್ಥಾನಗಳಲ್ಲಿ ಈಗಾಗಲೇ ವ್ಯವಸ್ಥಿತವಾದ ಪುರಾತತ್ತ್ವ ಪರಿವೀಕ್ಷಣಾಲಯಗಳನ್ನು ಸ್ಥಾಪಿಸಲಾಗಿದೆ. ಮಧ್ಯಂತರ ಸ್ಥಾನವನ್ನು ಪಡೆದಿರುವ ಕಾರಣ, ಆ ಸಂಸ್ಥಾನಗಳಲ್ಲಿ ಕಂಡುಹಿಡಿಯಲಾಗುತ್ತಿರುವುದರ

ಬಹುಪಾಲು ವಿಷಯಗಳ ಬಗೆಗೆ ವಿವರಣೆ ನೀಡುವ ಕೊಂಡಿಯಾಗಿ ಮೈಸೂರು ಸಂಸ್ಥಾನ ಕಾಣುತ್ತಿದೆ."

ಸಾರ್ವಜನಿಕ ಶಿಕ್ಷಣ ಇಲಾಖೆಯ ನಿರ್ದೇಶಕರಾಗಿದ್ದ ಮತ್ತು ಶಿಕ್ಷಣ ಮತ್ತು ಇತರ ವಿಭಾಗಗಳಿಗೆ ಕಾರ್ಯದರ್ಶಿಯಾಗಿದ್ದ ಬೆಂಜಮಿನ್ ಲೂಯಿಸ್ ರೈಸ್ ಅವರಿಗೆ, ೨೪ನೇ ಜನವರಿ ೧೮೮೪ರಂದು, ಅವರ ಕರ್ತವ್ಯಗಳ ಜೊತೆಗೆ ಪುರಾತತ್ತ್ವ ಇಲಾಖೆಯ ಮೇಲ್ವಿಚಾರಣೆಯನ್ನೂ ವಹಿಸಲಾಯಿತು. ಪುರಾತತ್ತ್ವ ಸಂಶೋಧನೆಯ ಒಂದು ವಿಭಾಗದ ಕೆಲಸವಾದ ಶಾಸನಗಳ ಸಂಗ್ರಹ ಮತ್ತು ಲಿಪಿಗಳನ್ನು ಓದುವ ಕೆಲಸವನ್ನು ಕೆಲವು ವರ್ಷಗಳಲ್ಲಿಯೇ ಮುಗಿಸಿ, ಅನಂತರ ಕೈ ಬಿಡಬಹುದೆಂದು ಭಾವಿಸಲಾಗಿತ್ತು; ಆದ್ದರಿಂದ ಈ ಕೆಲಸಕ್ಕೆ ಶಾಶ್ವತವಾದ ಅಧಿಕಾರ ಸ್ಥಾನವೊಂದನ್ನು ನಿರ್ಮಿಸುವುದರ ಬಗ್ಗೆ ಅಂದಿನ ಸರ್ಕಾರಕ್ಕೆ ಯಾವ ಕಾಳಜಿಯೂ ಇರಲಿಲ್ಲ.

೧೮೯೦ರ ಸುಮಾರಿಗೆ, ರಾಜ್ಯದ ದಿವಾನರು ಈ ಕೆಲಸದ ಅಗಾಧತೆಯನ್ನು ಗುರುತಿಸಿದರು. ಈ ಸಂಶೋ. ಧನೆಯ ಕೆಲಸಕ್ಕೆ ಬೇಕಾದ ಸಮರ್ಪಣ ಭಾವ, ಪ್ರಯತ್ನ, ಉತ್ಸಾಹಗಳನ್ನೂ, ಸಂಗ್ರಹ ಮಾಡಲಾದ ವಸ್ತುಗಳ ಮಹತ್ವವನ್ನೂ ಅರ್ಥಮಾಡಿಕೊಂಡರು. ದಿವಾನರಾಗಿದ್ದ ಕೆ. ಶೇಷಾದ್ರಿ ಅಯ್ಯರ್ ಅವರ ಮಾತಿನಂತೆ, ೨೬ನೇ ಏಪ್ರಿಲ್ ೧೮೯೦ರಲ್ಲಿ, ಬೆಂಜಮಿನ್ ಲೂಯಿಸ್ ರೈಸ್ ಅವರನ್ನು ಉಳಿದ ಕೆಲಸಗಳಿಂದ ಬಿಡುಗಡೆ ಮಾಡಿ, ಪುರಾತತ್ತ್ವ ಸಂಶೋಧನೆಗಳ ಪೂರ್ಣ ಕಾಲದ ನಿರ್ದೇಶಕರನ್ನಾಗಿ ನೇಮಿಸಲಾಯಿತು. ಜನಗಣತಿಯ ಮೇಲ್ವಿಚಾರಕರಾಗಿದ್ದ ವಿ. ಎನ್. ನರಸಿಂಹ ಅಯ್ಯಂಗಾರ್ ಅವರನ್ನು ೧೮೯೩ರಲ್ಲಿ ರೈಸ್ ಅವರ ಸಹಾಯಕರನ್ನಾಗಿ ನೇಮಿಸಲಾಯಿತು. ಪುಣೆಯ ಡೆಕ್ಕನ್ ಕಾಲೇಜಿನಲ್ಲಿ ಪ್ರಾಚ್ಯ ಭಾಷೆಗಳ ಪ್ರಾಧ್ಯಾಪಕರಿಗೆ ಸಹಾಯಕರಾಗಿದ್ದ ಕೆ. ಬಿ. ಪಾಠಕ್ ಅವರನ್ನು, ರೈಸ್ ಅವರಿಗೆ ಸಹಾಯ ಮಾಡಲು, ೧೮೯೬ರಲ್ಲಿ ತಾತ್ಕಾಲಿಕವಾಗಿ ನೇಮಕ ಮಾಡಲಾಯಿತು. ಅವರು ೧೮೯೭ರ ಆಗಸ್ಟ್‌ನಲ್ಲಿ ಪುಣೆಗೆ ಹಿಂತಿರುಗಿದಾಗ ಅವರ ಸ್ಥಾನಕ್ಕೆ ಶಿಕ್ಷಣ ಇಲಾಖೆಯಲ್ಲಿ ಭಾಷಾಂತರಕಾರರಾಗಿದ್ದ ಆರ್. ನರಸಿಂಹಾಚಾರ್ ಬಂದರು.

೧೮೯೦ರಲ್ಲಿ, ಪುರಾತತ್ತ್ವ ಇಲಾಖೆಯ ಪೂರ್ಣ ಕಾಲದ ನಿರ್ದೇಶಕರಾಗಿ ಕೆಲಸವನ್ನು ವಹಿಸಿಕೊಂಡಂದಿನಿಂದ ಹಿಡಿದು ೧೯೦೬ರಲ್ಲಿ ನಿವೃತ್ತರಾಗುವವರೆಗೆ, ರೈಸ್ ಅವರ ಅಧಿಕಾರಾವಧಿ ಸಾಧನೆಗಳ ಸರಪಳಿಯಾಗಿದೆ. 'ಎಪಿಗ್ರಾಫಿಯಾ ಕರ್ನಾಟಿಕಾ' ಎಂಬ ಹೆಸರಿನ ೧೨ ಸಂಪುಟಗಳಲ್ಲಿ ಅವರು ಸುಮಾರು ೯೦೦೦ ಶಾಸನಗಳನ್ನು ಪ್ರಕಟಿಸಿದರು. ಈ ಕಾಲದಲ್ಲಿ ಭಾರತ ಸರ್ಕಾರವು ಇನ್ಸ್‌ಕ್ರಿಪ್ಷನಂ ಇಂಡಿಕೇರಂ' ಎಂಬ ಶೀರ್ಷಿಕೆಯಲ್ಲಿ ಶಾಸನಗಳನ್ನು ಸಂಗ್ರಹಿಸಿ ಪ್ರಕಟಿಸುತ್ತಿತ್ತು. ರೈಸ್ ಅವರು 'ಎಪಿಗ್ರಾಫಿಯಾ ಕರ್ನಾಟಿಕಾ' ಸಂಪುಟಗಳನ್ನು ಪ್ರಕಟಿಸಿದ ಮೇಲೆ, ಭಾರತ ಸರ್ಕಾರದ ಶಾಸನ ಸಂಗ್ರಹ ಸಂಪುಟಗಳನ್ನು 'ಎಪಿಗ್ರಾಫಿಯಾ ಇಂಡಿಕಾ' ಎಂದು ಕರೆಯಲಾಯಿತು.

೧೮೮೬ರಲ್ಲಿ, ಕೊಡಗಿನ ಶಾಸನಗಳನ್ನೊಳಗೊಂಡ ಎಪಿಗ್ರಾಫಿಯಾ ಕರ್ನಾಟಿಕಾದ ಮೊದಲ ಸಂಪುಟವನ್ನು ರೈಸ್ ಪ್ರಕಟಿಸಿದರು. ಅಕ್ಟೋಬರ್ ೧೮೮೮ ರಲ್ಲಿ ಬರ್ಜೆಸ್ ಅವರು ತ್ರೈಮಾಸಿಕ ಪ್ರಕಟಣೆಯಾಗಿ 'ಎಪಿಗ್ರಾಫಿಯಾ ಇಂಡಿಕಾ'ವನ್ನು ಪ್ರಕಟಿಸಿದರು. 'ಎಪಿಗ್ರಾಫಿಯಾ' (ಈ ಶಬ್ದ ಶಾಸನಗಳ ಸಂಗ್ರಹವನ್ನು ಸೂಚಿಸುತ್ತದೆ) ಎನ್ನುವ ಶಬ್ದ ಪ್ರಯೋಗ ಭಾರತೀಯ ವಿದ್ವತ್ ಪ್ರಪಂಚಕ್ಕೆ, ಲೂಯಿಸ್ ರೈಸ್ ಮತ್ತು ಹಿಂದಿನ ಮೈಸೂರು ಸಂಸ್ಥಾನದ ಕೊಡುಗೆ.

೧೮೯೨ರಲ್ಲಿ ಚಿತ್ರದುರ್ಗ ಜಿಲ್ಲೆಯಲ್ಲಿ ಅಶೋಕನ ಶಾಸನಗಳನ್ನು ಕಂಡು ಹಿಡಿದು, ರೈಸ್ ಹೊಸ ಯುಗವೊಂದನ್ನೇ ನಿರ್ಮಾಣ ಮಾಡಿದರು. ಪ್ರಪಂಚದ ಎಲ್ಲೆಡೆಯ ವಿದ್ವಾಂಸರು ಈ ಸಂಶೋಧನೆಯನ್ನು ಹೊಗಳಿದ್ದಾರೆ.

ರೈಸ್ ಅವರು 'ಮೈಸೂರು ಗ್ಯಾಸೆಟಿಯರ್'ನ ಎರಡು ಸಂಪುಟಗಳನ್ನು ಪ್ರಕಟಿಸಿದರು. 'ಬಿಬ್ಲಿಯೊಥಿಕಾ ಕರ್ನಾಟಿಕಾ' ಎಂಬ ಮತ್ತೊಂದು ಬಗೆಯ ಸಂಪುಟ ಮಾಲೆಗೂ ಅವರು ಕಾರಣರಾದರು. ಕನ್ನಡ ಸಾಹಿತ್ಯ ಕ್ಷೇತ್ರದ ಮಹಾಕೃತಿಗಳಾದ 'ಕರ್ನಾಟಕ ಭಾಷಾ ಭೂಷಣ', 'ಕರ್ನಾಟಕ ಶಬ್ದಾನುಶಾಸನ', 'ಪಂಪ ರಾಮಾಯಣ', 'ಪಂಪಭಾರತ', 'ಕವಿರಾಜಮಾರ್ಗ' ಮತ್ತು 'ಕಾವ್ಯಾವಲೋಕನ'ಗಳು ಈ ಮಾಲೆಯಲ್ಲಿ ಪ್ರಕಟವಾದವು.

ರೈಸ್, ಅಸಂಖ್ಯಾತ ಹಸ್ತಪ್ರತಿಗಳನ್ನು ಸಂಗ್ರಹಿಸಿದರು. ಈ ಹಸ್ತಪ್ರತಿಗಳನ್ನು ಸುರಕ್ಷಿತವಾಗಿಡುವ ಉದ್ದೇಶದಿಂದ ಸರ್ಕಾರದ ಪ್ರಾಚ್ಯವಸ್ತು ಭಂಡಾರವನ್ನು ಪ್ರಾರಂಭಿಸಲಾಯಿತು. ಭಾರತ ಸರ್ಕಾರ ಹಾಗೂ ರಾಜ್ಯ ಸರ್ಕಾರಗಳೆರಡೂ ರೈಸ್ ಅವರ ಸೇವೆಯನ್ನು ಅನೇಕ ವಿಶೇಷ ಕೆಲಸಗಳಿಗೆ ಬಳಸಿಕೊಂಡವು. ರಾಜ್ಯ ಸರ್ಕಾರದ ಕಾರ್ಯದರ್ಶಿಗಳಿಗೋಸ್ಕರ ಶಾಸನಗಳನ್ನು ಓದುವ ಮತ್ತು ಅನುವಾದ ಮಾಡುವ ಕೆಲಸಗಳಿಗೆ ಅವರನ್ನು ನೇಮಿಸಲಾಯಿತು ; ಅವರು, ಭಾರತ ಸರ್ಕಾರಕ್ಕೆ ಮೈಸೂರು ಮತ್ತು ಕೊಡಗಿನ ಗ್ಯಾಸೆಟಿಯರುಗಳನ್ನು (೧೮೭೩) ತಯಾರು ಮಾಡಿಕೊಟ್ಟರು ; ಮೈಸೂರು ಮತ್ತು ಕೊಡಗಿನಲ್ಲಿದ್ದ ಸಂಸ್ಕೃತ ಹಸ್ತಪ್ರತಿಗಳ ಪಟ್ಟಿಯನ್ನು ಸಿದ್ಧಪಡಿಸಿದರು ; ಕಲ್ಕತ್ತದ ಶಿಕ್ಷಣ ಕಮಿಷನರ್ ಜೊತೆಯಲ್ಲಿ ವಿಶೇಷ ಕರ್ತವ್ಯ ನಿರ್ವಹಣೆ ಮಾಡಿದರು ; ಮೈಸೂರಿನ ಜನಗಣತಿಯ (೧೮೮೩) ವರದಿಯನ್ನು ಸಂಗ್ರಹಿಸಿದರು ; ಮೈಸೂರು ಗ್ಯಾಸೆಟಿಯರ್‌ನ ಹೊಸ ಆವೃತ್ತಿಯನ್ನು (೧೮೯೭) ಹೊರ ತಂದರು ; ಭಾರತದ ಇಂಪೀರಿಯಲ್ ಗ್ಯಾಸೆಟಿಯರ್‌ಗೆ ಮೈಸೂರು ಗ್ಯಾಸೆಟಿಯರನ್ನು ಪರಿಷ್ಕೃತ ಮಾಡಿಕೊಟ್ಟರು (೧೯೦೭) ; ಕೊಡಗಿನ ಗ್ಯಾಸೆಟಿಯರನ್ನು ಸಿದ್ಧಪಡಿಸಿಕೊಟ್ಟರು (೧೯೦೩).

ಕರ್ನಾಟಕದ ಇತಿಹಾಸ ಮತ್ತು ಸಾಂಸ್ಕೃತಿಕ ಪರಂಪರೆಯ ಉನ್ನತ ಅಧ್ಯಯನಕ್ಕೆ ರೈಸ್ ಅವರು ದೃಷ್ಟಾರಕರಾದರು. ಅವರ ಕೆಲಸಗಳಿಂದ ಪ್ರಾಚೀನ ಭಾರತದ ಸಾಹಿತ್ಯದ ಅಧ್ಯಯನದಲ್ಲಿ ಕನ್ನಡ ಸಾಹಿತ್ಯಕ್ಕೆ ಹೆಮ್ಮೆಯ ಸ್ಥಾನ ದೊರಕಿತು. ೧೯೦೬ರಲ್ಲಿ ರೈಸ್ ನಿವೃತ್ತರಾದರು.

೧೮೯೬ ರಿಂದ ರೈಸ್‌ಗೆ ಸಹಾಯಕರಾಗಿದ್ದ, ಮಹಾವಿದ್ವಾಂಸರಾಗಿದ್ದ, ಆರ್. ನರಸಿಂಹಾಚಾರ್ ಅವರೇ, ರೈಸ್ ನಂತರ ಅಧಿಕಾರಕ್ಕೆ ಬಂದರು. ನರಸಿಂಹಾಚಾರ್ ಅಧಿಕಾರ ವಹಿಸಿಕೊಂಡಾಗ ಅವರನ್ನು 'ಪುರಾತತ್ತ್ವ ಸಂಶೋಧನೆಗಳ ಮುಖ್ಯಾಧಿಕಾರಿ' ಎಂದು ಗಣಿಸಿ, ಅವರನ್ನು ಶಿಕ್ಷಣ ಕ್ಷೇತ್ರದ ಮಹಾ ನಿರೀಕ್ಷಕರ ಆಡಳಿತದ ಹಿಡಿತಕ್ಕೆ ಒಳಪಡಿಸಲಾಯಿತು. ೧೯೧೧ರಲ್ಲಿ, ಅವರಿಗೆ ಕಾರ್ಯನಿರ್ವಹಣೆಯ ಸ್ವಾತಂತ್ರ್ಯ ನೀಡಿ 'ಪುರಾತತ್ತ್ವ ಸಂಶೋಧನೆಗಳ ನಿರ್ದೇಶಕ'ರೆಂದು ಪುನರ್ ನೇಮಕ ಮಾಡಲಾಯಿತು.

ಶಾಸನಗಳನ್ನು ಹುಡುಕುವ ಕೆಲಸ ರಭಸದಿಂದ ಮುಂದುವರಿಯಿತು. ಹಿಂದೆ ಗಮನಕ್ಕೆ ಬಾರದಿದ್ದ ಅನೇಕ ಶಾಸನಗಳನ್ನು ಸಂಗ್ರಹಿಸಲಾಯಿತು ಮತ್ತು ಹಿಂದೆ ಸಮಾಧಾನಕರವಾಗಿ ಓದದಿದ್ದ ಕೆಲವನ್ನು ಪರಿಷ್ಕೃತ ಮಾಡಲಾಯಿತು. ವಾರ್ಷಿಕ ವರದಿಗಳನ್ನು ನೀಡುವುದರೊಂದಿಗೆ ತನ್ನ ಕೆಲಸವನ್ನು ಇಲಾಖೆಯು ಪ್ರಾರಂಭಿಸಿತು. ಮೈಸೂರು ವಿಶ್ವವಿದ್ಯಾಲಯದ ಇತಿಹಾಸ ಉಪನ್ಯಾಸಕರಾಗಿದ್ದ ಎಂ. ಎಚ್. ಕೃಷ್ಣ ಅವರ ಸೇವೆಯನ್ನು ೧೯೨೦–೨೨ರ ಅವಧಿಯಲ್ಲಿ ಈ ಇಲಾಖೆಗೆ ನೀಡಲಾಯಿತು. ಈ ಕಾಲದಲ್ಲಿ ಕೃಷ್ಣ ಅವರು ಮೈಸೂರಿನ ಸರ್ಕಾರಿ ವಸ್ತು ಪ್ರದರ್ಶನಾಲಯದಲ್ಲಿದ್ದ ನಾಣ್ಯಗಳ ಪಟ್ಟಿಯನ್ನು ಸಿದ್ಧಪಡಿಸಿದರು. ೧೯೨೮–೩೧ರಲ್ಲಿ ಆ ಪಟ್ಟಿಯ ಪರಿಷ್ಕರಣೆಯಾದರೂ ಇನ್ನೂ ಈ ಕೃತಿ ಬೆಳಕಿಗೆ ಬಂದಿಲ್ಲ.

ಆರ್. ನರಸಿಂಹಾಚಾರ್ ಅವರು 'ಮೈಸೂರಿನಲ್ಲಿ ವಾಸ್ತುಶಿಲ್ಪ ಮತ್ತು ಮೂರ್ತಿಶಿಲ್ಪ' ಎಂಬ ಹೊಸ ಮಾಲೆಯನ್ನು ಪ್ರಾರಂಭಿಸಿದರು. ಬೇಲೂರಿನ ಚೆನ್ನಕೇಶವ ದೇವಾಲಯ, ಸೋಮನಾಥಪುರದ ಕೇಶವ ದೇವಾಲಯ ಮತ್ತು ದೊಡ್ಡಗದ್ದವಳ್ಳಿಯ ಮಹಾಲಕ್ಷ್ಮೀ ದೇವಾಲಯ–ಎಂಬ ದೇವಸ್ಥಾನಗಳನ್ನು ಕುರಿತ ಮೂರು 'ಮಾನೋಗ್ರಾಫ್' ಗಳು ಈ ಮಾಲೆಯಲ್ಲಿ ಬಂದವು.

ಸ್ಫುಟವಾದ ಮತ್ತು ಬೇರೆಯಾದ ಶೈಲಿಯೆಂದು ಹೊಯ್ಸಳ ವಾಸ್ತುಶಿಲ್ಪವನ್ನು ಗುರುತಿಸಿದ ಕೀರ್ತಿ ನರಸಿಂಹಾಚಾರ್ಯರಿಗೆ ಸೇರುತ್ತದೆ. ಇದಕ್ಕೆ ಮುಂಚೆ ಹೊಯ್ಸಳ ಶೈಲಿಯನ್ನು ಚಾಲುಕ್ಯ ಶೈಲಿಯಲ್ಲಿ ಸೇರಿಸಲಾಗಿತ್ತು. ಇವರ ಕಾಲದಲ್ಲಿ ದೇವನಹಳ್ಳಿ ತಾಲ್ಲೂಕಿನ ಕೆಲವು 'ಕ್ರೋಮೋಲೆಕ್'ಗಳನ್ನು ತೆರೆಯಲಾಯಿತು. ೧೯೨೨ ರಲ್ಲಿ, ಚಿತ್ರದುರ್ಗ, ತಲಕಾಡು ಮತ್ತು ಹಳೆಯಬೀಡುಗಳಲ್ಲಿ ಸಣ್ಣ ಪ್ರಮಾಣದ ಪ್ರಾಯೋಗಿಕ ಉತ್ಖನನಗಳನ್ನು ಕೈಗೊಳ್ಳಲಾಯಿತು. ೧೯೨೪ ರಲ್ಲಿ ಹಳೆಯಬೀಡಿನ ಪಾರ್ಶ್ವನಾಥ ಬಸದಿಯ ಸುತ್ತುಗೋಡೆಯೊಳಗೆ ಕೆಲವು ಉತ್ಖನನಗಳನ್ನು ಮಾಡಲಾಯಿತು.

ಆರ್. ನರಸಿಂಹಾಚಾರ್ ಅವರ ಮುಖ್ಯವಾದ ಕೊಡುಗೆ ಕನ್ನಡ ಸಾಹಿತ್ಯ ಕ್ಷೇತ್ರಕ್ಕೆ ಸಂಬಂಧಿಸಿದುದು. ಕರ್ಣಾಟಕ ಕವಿಚರಿತೆ ಎಂಬ ಮೂರು ಸಂಪುಟಗಳನ್ನು ಪ್ರಕಟಿಸಿ, ಇವರು ಹೊಸಯುಗವನ್ನೇ ಆರಂಭಿಸಿದರು. ಇವರು ತಮ್ಮ ಪ್ರೌಢಿಮೆ ಹಾಗೂ ಶ್ರದ್ಧೆಗಳಿಂದ, ರೈಸ್ ಹಾಕಿಕೊಟ್ಟಿದ್ದ ಅಸ್ತಿಭಾರವನ್ನು ಬಲಪಡಿಸಿದರು. ಹೊಯ್ಸಳ ಶೈಲಿಯ ವಾಸ್ತುಶಿಲ್ಪಗಳ ಬಗೆಗಿನ ಇವರ ಕೆಲಸ, ಮೈಸೂರಿನ ಸ್ಮಾರಕಗಳ ಕಲಾತ್ಮಕ ಗುಣಗಳ ಬಗ್ಗೆ ಎಲ್ಲ ವಿದ್ವಾಂಸರ ಗಮನ ಸೆಳೆಯಿತು. ಪ್ರಾಚ್ಯವಸ್ತು ಸಂಶೋಧನಾ ಕಾರ್ಯದಲ್ಲಿ ಇವರು ಅಳಿಸಲಾಗದ ಪ್ರಭಾವವನ್ನು ಬೀರಿ ಹೋಗಿದ್ದಾರೆ.

೧೯೨೨ ರಲ್ಲಿ ನರಸಿಂಹಾಚಾರ್ ನಿವೃತ್ತರಾದಾಗ, ಇಲಾಖೆಯನ್ನು ಮುನ್ನಡೆಸುವ ಕೆಲಸ ಆರ್. ಶ್ಯಾಮಾ ಶಾಸ್ತ್ರಿಗಳ ಪಾಲಿಗೆ ಬಂದಿತು. ಮೈಸೂರಿನ ಪ್ರಾಚ್ಯವಸ್ತು ಭಂಡಾರದ ಕ್ಯೂರೇಟರ್ ಕೆಲಸದ ಜೊತೆಯಲ್ಲಿ ಮೈಸೂರಿನ ಪುರಾತತ್ತ್ವ ಸಂಶೋಧನೆಗಳ ನಿರ್ದೇಶಕರಾಗಿ ಶಾಸ್ತ್ರಿಗಳನ್ನು ನೇಮಿಸಲಾಯಿತು ಅದೇ ವರ್ಷ ಇಲಾಖೆಯ ಕಾರ್ಯಾಲಯವನ್ನು ಬೆಂಗಳೂರಿನಿಂದ ಮೈಸೂರಿಗೆ ವರ್ಗಾಯಿಸಲಾಯಿತು. ಮತ್ತು ನಿರ್ದೇಶಕರನ್ನು ಮೈಸೂರು ವಿಶ್ವವಿದ್ಯಾನಿಲಯದ ಆಡಳಿತಕ್ಕೆ ಒಳಪಡಿಸಲಾಯಿತು. ಪ್ರಾಚೀನ ಸ್ಮಾರಕಗಳ ರಕ್ಷಣೆಯ ಕಾನೂನು ೧೯೨೫ ರಲ್ಲಿ ರಾಜ್ಯದಲ್ಲಿ ಅಸ್ತಿತ್ವಕ್ಕೆ ಬಂದಿತು.

ಶ್ಯಾಮಾಶಾಸ್ತ್ರಿಗಳು ಒಂದು ಮಹತ್ವದ ಸಂಸ್ಕೃತ ಕೃತಿಯಾದ ಕೌಟಿಲ್ಯನ ಅರ್ಥಶಾಸ್ತ್ರವನ್ನು ಕಂಡುಹಿಡಿದು ಅದನ್ನು ಸಂಪೂರ್ಣವಾಗಿ ಇಂಗ್ಲಿಷಿಗೆ ಅನುವಾದ ಮಾಡಿ ಪ್ರಕಟಿಸಿದರು. ಮೌರ್ಯ ರಾಜ್ಯ ವ್ಯವಸ್ಥೆಯ ಅನೇಕ ವಿಷಯಗಳಲ್ಲಿ ಇವರು ಅಧಿಕೃತ ವಾಣಿಯಾಗಿದ್ದರು. ಇವರು ಭಾರತ ಸರ್ಕಾರದ ಪರವಾಗಿ, ಭಾರತದ ಪುರಾತತ್ತ್ವ ಪರಿವೀಕ್ಷಣಾಲಯದವರು ಸಂಗ್ರಹಿಸಿದ್ದ ಅಪಾರವಾದ ಕನ್ನಡ ಶಾಸನಗಳಿದ್ದ 'ದಕ್ಷಿಣಭಾರತದ ಶಾಸನ' ಎಂಬ ಹೆಸರಿನ ಒಂಬತ್ತನೆಯ ಸಂಪುಟವನ್ನು ಸಂಪಾದಿಸಿ ಪ್ರಕಟಿಸಿದರು. ಮೈಸೂರು ರಾಜ್ಯಕ್ಕೆ ಇವರು ಪ್ರಕಟಿಸಿ ಕೊಟ್ಟ ಏಳು ವಾರ್ಷಿಕ ವರದಿಗಳು ಅಮೂಲ್ಯ ಕೊಡುಗೆಗಳಾಗಿವೆ. ಪ್ರಾಚ್ಯ ಸಂಶೋಧನೆಯಲ್ಲಿ ಶ್ಯಾಮಾಶಾಸ್ತ್ರಿಗಳು ತೋರಿಸಿದ ಧೈರ್ಯ, ಸಾಹಸಗಳು ರಾಜ್ಯದ ಸಂಶೋಧನಾ ಕಾರ್ಯಗಳಿಗೆ ಹೊಸದೊಂದು ಆಯಾಮವನ್ನು ಉಂಟುಮಾಡಿದವು.

ಡಾ|| ಎಂ. ಎಚ್. ಕೃಷ್ಣ, ವಿಶ್ವವಿದ್ಯಾನಿಲಯದ ಕೆಲಸದ ಜೊತೆಯಲ್ಲಿಯೇ ಪುರಾತತ್ತ್ವ ಸಂಶೋಧನೆಯ ನಿರ್ದೇಶಕರಾಗಿ ೧೯೨೮ ರಲ್ಲಿ ಶ್ಯಾಮಾಶಾಸ್ತ್ರಿಗಳ ಸ್ಥಾನಕ್ಕೆ ಬಂದರು. ಇವರು ಎರಡೂ ಅಧಿಕಾರಗಳನ್ನು ೧೯೪೪ರ ವರೆಗೂ ಹೊಂದಿದ್ದರು. ಆ ವರ್ಷ ಪುರಾತತ್ತ್ವ ಇಲಾಖೆಯನ್ನು ವಿಶ್ವವಿದ್ಯಾನಿಲಯದಿಂದ ಬೇರ್ಪಡಿಸಿದಾಗ,ಕೃಷ್ಣ, ಸ್ವತಂತ್ರ ಕಾರ್ಯಾಧಿಕಾರದ ಪೂರ್ಣ ಕಾಲದ ನಿರ್ದೇಶಕರಾದರು. ಸಾಂಸ್ಕೃತಿಕ ಇತಿಹಾಸ, ಪುರಾತತ್ತ್ವ ಶಾಸ್ತ್ರ, ಮಾನವ ವಿಜ್ಞಾನ ಮತ್ತು ಸಮಾಜ ಶಾಸ್ತ್ರಗಳಲ್ಲಿ ಲಂಡನ್ ವಿಶ್ವವಿದ್ಯಾನಿಲಯದಲ್ಲಿ ಉನ್ನತ ವ್ಯಾಸಂಗ ಮತ್ತು ತರಬೇತಿ ಪಡೆದಿದ್ದ ಕೃಷ್ಣ, ಪುರಾತತ್ತ್ವ ಇಲಾಖೆಯ ಚಟುವಟಿಕೆಗಳಿಗೆ ಹೊಸ ಆಯಾಮ ಒದಗಿಸಿ, ಹೊಸಯುಗಕ್ಕೆ ಕಾರಣರಾದರು.

ಹಿಂದಿನವರು ಶಾಸನಶಾಸ್ತ್ರ ಮತ್ತು ಸ್ವಲ್ಪಮಟ್ಟಿಗೆ ಕಲೆಗಳ ಅಭ್ಯಾಸಕ್ಕೆ ಹೆಚ್ಚು ಗಮನವನ್ನು ಕೇಂದ್ರೀಕರಿಸಿದ್ದರೆ, ಕೃಷ್ಣ ಅವರು ವೈಜ್ಞಾನಿಕ ಉತ್ಖನನಗಳನ್ನೂ ನಾಣ್ಯಗಳ ಅಧ್ಯಯನವನ್ನು ವಾಸ್ತುಶಿಲ್ಪ ಮತ್ತು ಮೂರ್ತಿಶಿಲ್ಪಗಳ ಅಧ್ಯಯನವನ್ನೂ ಕೈಗೊಂಡರು. ಇಲಾಖೆಯ ಎಲ್ಲ ಕೆಲಸವನ್ನು ಇವರು ಎಷ್ಟು ಹೊಂದಾಣಿಕೆ ಮಾಡಿಕೊಂಡಿದ್ದರೆಂದರೆ, ಇಲಾಖೆಯ ಕಾರ್ಯ ಚಟುವಟಿಕೆಗಳು ವ್ಯಾಪಕವಾಗಿ ಬೆಳೆದು ವಿಶ್ವದ ಕಣ್ಣಿಗೆ ಬೀಳುವಂತಾಯಿತು.

ಹರಪ್ಪ ಮತ್ತು ಮೊಹೆಂಜೋದಾರೋಗಳಲ್ಲಿ ಉತ್ಖನನಗಳು ನಡೆಯುತ್ತಿದ್ದ ಸಮಯದಲ್ಲಿ ಕೃಷ್ಣ, ದಕ್ಷಿಣ ಭಾರತ ಕ್ಷೇತ್ರದಲ್ಲಿ ಮಿಂಚಿನಂತೆ ಕೆಲಸಮಾಡಿದರು. ೧೯೨೫ ಮತ್ತು ೧೯೪೨ ರ ಮಧ್ಯಾವಧಿಯಲ್ಲಿ ಇವರು ಸ್ಟ್ರಾಟಿಗ್ರಾಫಿಕ್ ತಂತ್ರವನ್ನು ಭಾರತದಲ್ಲಿ ಮೊದಲಬಾರಿಗೆ ಉಪಯೋಗಿಸಿ, ಚಿತ್ರದುರ್ಗ ಜಿಲ್ಲೆಯ ಚಂದ್ರವಳ್ಳಿ ಮತ್ತು ಬ್ರಹ್ಮಗಿರಿಗಳಲ್ಲಿ ಉತ್ಖನನಗಳನ್ನು ನಡೆಸಿದರು. ತಾತ್ಕಾಲಿಕವಾಗಿ ನಿಲ್ಲಿಸಲಾಗಿದ್ದ ನಾಣ್ಯಗಳ ಅಧ್ಯಯನವನ್ನು ಪುನಶ್ಚೇತನಗೊಳಿಸಿ, ವಾರ್ಷಿಕ ವರದಿಗಳಲ್ಲಿ

ಅವರ ಅಧ್ಯಯನಗಳ ಫಲಿತಾಂಶವನ್ನು ಪ್ರಕಟಿಸಿದರು. ರೈಸ್ ಮತ್ತು ನರಸಿಂಹಾಚಾರ್ ಅವರು ಕ್ರಮವಾಗಿ ೯೦೦೦ ಮತ್ತು ೫೦೦೦ ಶಾಸನಗಳನ್ನು ಸೇರಿಸಿದರು.

ಇವರು ರಾಜ್ಯದ ಮೂಲೆ ಮೂಲೆಗಳಲ್ಲಿದ್ದ ನೂರಾರು ವಾಸ್ತುಶಿಲ್ಪ ಮಹತ್ವದ ರತ್ನಗಳನ್ನು ಅಭ್ಯಾಸ ಮಾಡುವ ವೈಜ್ಞಾನಿಕ ಅಧ್ಯಯನವನ್ನು ಆರಂಭಿಸಿದರು. ಇದನ್ನು ನಮ್ಮ ದೇಶದ ಯಾವ ರಾಜ್ಯವೂ ಸರಿದೂಗಲು ಸಾಧ್ಯವಾಗಿಲ್ಲ. ಇಂಡಾಲಜಿಯ ವಿಜ್ಞಾನಿಗಳಿಗೆ ಅಸಾಧಾರಣವಾಗಿ ಉಪಯುಕ್ತವಾಗುವ ಕೃತಿಗಳು ಇಲಾಖೆಯಿಂದ ಪ್ರಕಟ ಮಾಡಲು ಇವರು ಪ್ರಮುಖ ಕಾರಣರಾದರು.

'ಎಪಿಗ್ರಾಫಿಯಾ ಕರ್ನಾಟಿಕದ' ೧೪ ಮತ್ತು ೧೫ ನೇ ಸಂಪುಟಗಳು; 'ಎಪಿಗ್ರಾಫಿಯಾ ಕರ್ನಾಟಿಕಾ' (ಭಾಗ ೧)ದ ಸೂಚಿ ; ಮೈಸೂರು ಪುರಾತತ್ತ್ವ ಪರಿವೀಕ್ಷಣೆಯ ವಾರ್ಷಿಕ ವರದಿಗಳ (೧೯೦೬–೧೯೧೮) ಸೂಚಿ; ಬೇಲೂರು, ಹಳೆಯಬೀಡು, ನಂದಿ, ಶ್ರವಣ ಬೆಳಗೊಳ, ತಲಕಾಡು, ಶ್ರೀರಂಗಪಟ್ಟಣಗಳ ಮಾರ್ಗ ದರ್ಶಿ ಪುಸ್ತಕಗಳು ಇವರ ಕಾಲದಲ್ಲಿ ಪ್ರಕಟವಾದುವು. ಇವರು, ಮೈಸೂರು ಪುರಾತತ್ತ್ವ ವಿಭಾಗದ ವಾರ್ಷಿಕ ವರದಿಗಳ ೧೮ ಸಂಪುಟಗಳನ್ನು (೧೯೨೯–೧೯೪೬) ಪ್ರಕಟಿಸಿದರು. ತಾವು ಕಂಡುಹಿಡಿದ ಹೊಸ ಶಾಸನಗಳ ವಿವರಗಳು, ನಾಣ್ಯಗಳ ಮೇಲಿನ ಟಿಪ್ಪಣಿಗಳು, ಉತ್ಖನನ ಟಿಪ್ಪಣಿಗಳು, ನೂರಾರು ಸ್ಮಾರಕಗಳ ವಿವರಣಾತ್ಮಕ ಅಧ್ಯಯನಗಳು–ಇವುಗಳಿಂದ ಕೂಡಿದ ಈ ವರದಿಗಳು ಸೂಕ್ಷ್ಮವಾಗಿ ಯೋಜಿಸಲಾದ ರೂಪ ಪಡೆದಿದ್ದು, ಸುಂದರವಾಗಿ ಮೂಡಿವೆ ಹಾಗೂ ಇಂಡಾಲಜಿಯ ಅಧ್ಯಯನಕ್ಕೆ ವಿಶೇಷ ಕೊಡುಗೆಯಾಗಿವೆ.

ಎರಡನೆಯ ಮಹಾಯುದ್ಧದ ಸಮಯದಲ್ಲಿ ಪುರಾತತ್ತ್ವ ವೀಕ್ಷಣೆಯ ವಾರ್ಷಿಕ ವರದಿಗಳ ಪ್ರಕಟಣೆಯನ್ನು ಭಾರತ ಸರ್ಕಾರದವರು ತಡೆ ಹಿಡಿದಿದ್ದಾಗ, ಮೈಸೂರಿನ ಪುರಾತತ್ತ್ವ ವೀಕ್ಷಣೆಯ ವರದಿಗಳು ನಿರಂತರವಾಗಿ ಸಕಾಲಕ್ಕೆ ಸರಿಯಾಗಿ ಹೊರ ಬಂದುದು ಗಮನಾರ್ಹ ಸಂಗತಿ.

ಈ ಮಹಾ ವಿದ್ವಾಂಸರ ಅನೇಕ ಮುಖ್ಯ ಕೃತಿಗಳು ಇನ್ನೂ ಬೆಳಕಿಗೆ ಬಾರದಿರುವುದು ಒಂದು ದುರಂತವಾಗಿದೆ. ರಾಜ್ಯದ ಪುರಾತತ್ತ್ವ ಇಲಾಖೆಯಲ್ಲಿ ಇತ್ತೀಚೆಗೆ ಕೃಷ್ಣರ ಮೂರು ಹಸ್ತಪ್ರತಿಗಳನ್ನು ಪತ್ತೆ ಹಚ್ಚಲಾಗಿದೆ. ಅವುಗಳನ್ನು ಬೇಗ ಪ್ರಕಟಿಸುತ್ತಾರೆಂಬ ಆಸೆ ನಮಗಿದೆ. ಕೃಷ್ಣ ಅವರಿಂದ ಇಲಾಖೆಯ ಕಾರ್ಯ ಚಟುವಟಿಕೆಗಳು ಉನ್ನತ ಸ್ಥಿತಿಗೆ ಏರಿದ್ದವು. ಇಂಡಾಲಜಿ ಸಂಶೋಧನೆಗಳಲ್ಲಿ ಕೃಷ್ಣರ ಕೊಡುಗೆ ಎಲ್ಲ ಕಾಲದಲ್ಲೂ ನಿಲ್ಲತಕ್ಕದ್ದಾಗಿದೆ. ರಾಜ್ಯದ ಸೇವೆ ಸಲ್ಲಿಸುತ್ತಿರುವಾಗಲೇ ೧೯೪೭ ರಲ್ಲಿ ಮೈಸೂರಿನಲ್ಲಿ ಹಠಾತ್ತಾಗಿ ಹೃದಯಾಘಾತದಿಂದ ಕೃಷ್ಣ ನಿಧನರಾದರು.

ಕೃಷ್ಣರ ಸಾವಿನ ನಂತರ, ಅವರ ಸ್ಥಾನವನ್ನು ೧೯೫೦ ರವರೆಗೆ ತುಂಬಿದವರು ಎಲ್. ನರಸಿಂಹಾಚಾರ್. ಈ ಅವಧಿಯಲ್ಲಿ ಭಾರತ ಸರ್ಕಾರದ ಪುರಾತತ್ತ್ವ ಪರಿವೀಕ್ಷಣಾ ಇಲಾಖೆ, ಚಂದ್ರವಳ್ಳಿ ಮತ್ತು ಬ್ರಹ್ಮಗಿರಿಗಳಲ್ಲಿ ಉತ್ಖನನಗಳನ್ನು ಮುಂದುವರೆಸಿತು. ೧೯೪೭ ರಲ್ಲಿ ಹಳೆಯ ಬೀಡಿನಲ್ಲಿ ಉತ್ಖನನಗಳನ್ನು ಮಾಡಲಾಯಿತು.

೧೯೫೦ ರಲ್ಲಿ ಕೆ. ನಾರಾಯಣ ಅಯ್ಯಂಗಾರ್ ಅವರು ನರಸಿಂಹಾಚಾರ್ ಅವರ ಸ್ಥಾನಕ್ಕೆ ಬಂದರು. ೧೯೫೧ರಲ್ಲಿ ಭಾರತದ ಪಾರ್ಲಿಮೆಂಟ್, ಪ್ರಾಚೀನ ಮತ್ತು ಐತಿಹಾಸಿಕ ಸ್ಮಾರಕಗಳು ಮತ್ತು ಪುರಾತತ್ತ್ವ ನಿವೇಶನಗಳು ಮತ್ತು ಉಳಿಕೆಗಳ ನಿಯಮಾವಳಿಯನ್ನು ಜಾರಿಗೆ ತಂದಿತು. ೧೯೫೩ ರಲ್ಲಿ ರಾಜ್ಯದ ರಾಷ್ಟ್ರೀಯ ಸ್ಮಾರಕಗಳನ್ನು ಭಾರತದ ಪುರಾತತ್ತ್ವ ಪರಿವೀಕ್ಷಣಾ ಇಲಾಖೆಯ ದಕ್ಷಿಣ ವೃತ್ತಕ್ಕೆ ವರ್ಗಾಯಿಸಲಾಯಿತು. ೧೯೫೪ ರಲ್ಲಿ ಇಲಾಖೆಯನ್ನು ಮತ್ತೆ ಮೈಸೂರು ವಿಶ್ವ ವಿದ್ಯಾನಿಲಯದ ಆಡಳಿತಕ್ಕೆ ಒಳಪಡಿಸಲಾಯಿತು. ಆಗ ಕೆ. ನೀಲಕಂಠಶಾಸ್ತ್ರಿಗಳು ಪುರಾತತ್ತ್ವ ನಿರ್ದೇಶಕ, ಇಂಡಾಲಜಿ ಪ್ರೊಫೆಸರ್ ಆಗಿ ಕಾರ್ಯ ನಿರ್ವಹಿಸಿದರು. ೧೯೫೭ ರಲ್ಲಿ ಡಾ|| ಎಂ. ಶೇಷಾದ್ರಿ ಅವರು ಅಧಿಕಾರಕ್ಕೆ ಬಂದರು.

೧೯೬೦ ರಲ್ಲಿ ಕೈಗಾರಿಕಾ ಮತ್ತು ವಾಣಿಜ್ಯ ವಿಭಾಗಗಳ ಆಡಳಿತದಲ್ಲಿದ್ದ ಸಂಗ್ರಹಾಲಯಗಳ ಆಡಳಿತ ಸೂತ್ರವನ್ನು ಪುರಾತತ್ತ್ವ ಇಲಾಖೆಗೆ ವರ್ಗಾಯಿಸಿ ಅದಕ್ಕೆ

ಪುರಾತತ್ತ್ವ ಮತ್ತು ಸಂಗ್ರಹಾಲಯ ನಿರ್ದೇಶನಾಲಯ ಎಂಬ ಹೆಸರನ್ನು ಕೊಡಲಾಯಿತು. ಬೆಂಗಳೂರು (೨) ಬಸವಕಲ್ಯಾಣ, ಚಿತ್ರದುರ್ಗ, ಗುಲ್ಬರ್ಗ, ಹಾಸನ, ಕಿತ್ತೂರು, ಮಡಿಕೇರಿ, ಮಂಗಳೂರು, ಶಿವಮೊಗ್ಗ ದಲ್ಲಿರುವ ಸಂಗ್ರಹಾಲಯಗಳು ಈ ಇಲಾಖೆಯ ಅಧೀನ ದಲ್ಲಿವೆ.

ಮೈಸೂರಿನ ಪ್ರಾಚೀನ ಮತ್ತು ಐತಿಹಾಸಿಕ ಸ್ಮಾರಕಗಳ ಮತ್ತು ಪುರಾತತ್ತ್ವ ನಿವೇಶನ ಮತ್ತು ಉಳಿಕೆಗಳ ನಿಯಮಾವಳಿಯನ್ನು ೧೯೬೨ ರಲ್ಲಿ ಜಾರಿಗೆ ತರಲಾಯಿತು. ಟಿ. ನರಸೀಪುರ ಮತ್ತು ಹೆಮ್ಮಿಗೆಯಲ್ಲಿ ಉತ್ಖನನಗಳನ್ನು ನಡೆಸಲಾಯಿತು.

೧೯೭೨ ರಲ್ಲಿ ಮತ್ತೆ ಇಲಾಖೆಯನ್ನು ಸ್ವತಂತ್ರ ವಾಗಿ ಮಾಡಲಾಯಿತು. ಡಾ॥ ಎಂ. ಎಸ್ ನಾಗರಾಜ ರಾವ್ ಅವರು ಡಾ॥ ಎಂ. ಶೇಷಾದ್ರಿ ಅವರಿಂದ ಅಧಿಕಾರ ಪಡೆದರು. ಹಳ್ಳೂರು ಮತ್ತು ತಡಕನಹಳ್ಳಿಗಳಲ್ಲಿ ಉತ್ಖ ನನಗಳು ನಡೆದವು. ೧೯೭೨ ರ ಪ್ರಾಚ್ಯವಸ್ತುಗಳ ಮತ್ತು ಕಲಾ ಭಂಡಾರದ ನಿಯಮಾವಳಿ, ೧೯೭೭ ರಲ್ಲಿ ಜಾರಿಗೆ ಬಂದಿತು.

ರಾಷ್ಟ್ರೀಯ ಪರಿಶೋಧನಾ ಯೋಜನೆಗಳ ಕಾರ್ಯ ಕ್ರಮದನ್ವಯ, ಹಂಪೆಯನ್ನು ಐತಿಹಾಸಿಕ ಮಹತ್ವವುಳ್ಳ ನಗರವೆಂದು ಪರಿಗಣಿಸಿ, ೧೯೭೬ ರಲ್ಲಿ ಉತ್ಖನನಗಳನ್ನು ನಡೆಸಲಾಯಿತು.

೧೯೮೩ ರಲ್ಲಿ ಎಂ. ಎಸ್. ನಾಗರಾಜರಾವ್ ಅವರು ಭಾರತದ ಪುರಾತತ್ತ್ವ ಪರಿವೀಕ್ಷಣಾಲಯದ ಮಹಾ ನಿರ್ದೇಶಕರಾಗಿ ದೆಹಲಿಗೆ ತೆರಳಿದರು. ಡಾ॥ ಅ. ಸುಂದರ ಈಗ ಇಲಾಖೆಯ ಅಧಿಕಾರ ವಹಿಸಿಕೊಂಡಿದ್ದಾರೆ. ಹಂಪೆಯಲ್ಲಿ ಈಗ ಉತ್ಖನನಗಳು ಮುಂದುವರಿಯುತ್ತಿವೆ. ಶಿವಪ್ಪನಾಯಕನ ಅರಮನೆಯ ರಿಪೇರಿ, ತುಮಕೂರು ಜಿಲ್ಲೆಯ ಅರಳುಗುಪ್ಪೆಯಲ್ಲಿ ಸಂರಕ್ಷಣೆ, ಈಗ ನಡೆ ಯುತ್ತಿರುವ ಕೆಲವು ಕೆಲಸಗಳು.

ಈ ಇಲಾಖೆಯ ಕಳೆದ ನೂರು ವರ್ಷಗಳ ಕಾರ್ಯ ಗಳನ್ನು ವೀಕ್ಷಿಸಿದಾಗ, ಅನೇಕ ಸ್ವಾರಸ್ಯಕರ ವಿಷಯಗಳು ಬಯಲಿಗೆ ಬರುತ್ತವೆ. ಈ ಅವಧಿಯಲ್ಲಿ ಇಲಾಖೆಯು ಅನೇಕ ಬದಲಾವಣೆಗಳನ್ನು ಕಂಡಿದೆ. ಎಂ. ಎಚ್ ಕೃಷ್ಣ ಅವರ ಕಾಲದಲ್ಲಿ (೧೯೨೯–೧೯೪೭) ಇಲಾಖೆಯ ಎಲ್ಲಾ ವಿಭಾಗಗಳಲ್ಲೂ ಸಮರ್ಪಕ ಕೆಲಸ ನಡೆಯಿತು. ಅವರಿ ಗಿಂತ ಹಿಂದೆ, ಶಾಸನಗಳಿಗೆ ಹೆಚ್ಚು ಮಹತ್ವವನ್ನು ನೀಡ ಲಾಗಿತ್ತು. ಕೃಷ್ಣರ ಅನಂತರದ ಕಾಲದಲ್ಲಿ, ಉತ್ಖನನ ಗಳಿಗೆ ಪ್ರಾಮುಖ್ಯತೆ ನೀಡಲಾಗಿದೆ. ಈ ಏಕತಾನತೆ ಬದಲಾಗುವುದೆಂಬ ಆಸೆ ಇದೆ.

೧೯೦೦ ರಲ್ಲಿ ಒಂದು ಬಾರಿ, ಮತ್ತೊಮ್ಮೆ ೧೯೧೬ ರಲ್ಲಿ ಭಾರತ ಸರ್ಕಾರದ ಪುರಾತತ್ತ್ವ ಪರಿವೀಕ್ಷಣಾ ಇಲಾಖೆಯು ರಾಜ್ಯದ ಸಂಶೋಧನಾ ಚಟುವಟಿಕೆಗಳನ್ನು ತನ್ನ ಆಡಳಿತಕ್ಕೊಳಪಡಿಸಿಕೊಳ್ಳುವ ಯೋಚನೆಯನ್ನು ಮಾಡಿತ್ತು. ಈ ಇಲಾಖೆಯ ಹಿರಿಮೆ ಹಾಗು ವಿಶ್ವದ ಎಲ್ಲೆಡೆಯಲ್ಲಿ ಇದು ಸಂಪಾದಿಸಿದ್ದ ಗೌರವಗಳ ಕಾರಣ ದಿಂದ, ಅಂದಿನ ಸರ್ಕಾರ ಈ ಸಲಹೆಗೆ ಬೆಂಬಲ ನೀಡಲಿಲ್ಲ.

ರೈಸ್, ನರಸಿಂಹಾಚಾರ್, ಶ್ಯಾಮಾಶಾಸ್ತ್ರಿ, ಕೃಷ್ಣ ಈ ನಾಲ್ಕು ಜನರ ಕೆಲಸಗಳು ಮುಂದಿನ ತಲೆಮಾರಿನ ಕನ್ನಡಿಗರಿಗೆ ದಾರಿದೀಪವಾಗಿ ಸ್ಫೂರ್ತಿಯನ್ನು ನೀಡಿ, ವಿಶ್ವದ ಪುರಾತತ್ತ್ವ ಸಂಶೋಧನೆಯ ನಕ್ಷೆಯಲ್ಲಿ ಕರ್ನಾಟಕ ಗಣ್ಯಸ್ಥಾನ ಪಡೆಯುತ್ತದೆಂದು ಆಶಿಸುತ್ತೇವೆ.

(ಇಂಗ್ಲಿಷ್‌ನಿಂದ ಅನುವಾದ : ಕೆ. ಆರ್. ಗಣೇಶ)